# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎನ್. ಅಪ್ಪಾಜಿಗೌಡ
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1105
ಉತ್ತರಿಸಬೇಕಾದ ದಿನಾಂಕ : 29.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಭಾರತಿ ನಗರ ವೃತ್ತಕ್ಕೆ ಮೇಲ್ವಿಚಾರಕರನ್ನಾಗಿ ಫೆಬ್ರವರಿ 2020 ರಿಂದ ಇಲ್ಲಿಯವರೆಗೆ ಎಷ್ಟು ಜನ ಅಧಿಕಾರಿಗಳನ್ನು ವರ್ಗಾವಣೆ ಮಾಡಲಾಗಿದೆ; ಇದಕ್ಕೆ ಕಾರಣಗಳೇನು; (ಮಾಹಿತಿ ನೀಡುವುದು) | ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಕೆ.ಎಂ.ದೊಡ್ಡಿ (ಭಾರತಿನಗರ) ವೃತ್ತಕ್ಕೆ ಫೆಬ್ರವರಿ 2020 ರಿಂದ ಇಲ್ಲಿಯವರೆಗೆ ಮೂರು ವೃತ್ತ ಮೇಲ್ವಿಚಾರಕರುಗಳನ್ನು ವರ್ಗಾವಣೆ ಮಾಡಲಾಗಿದೆ.<br>ಬ್ಯಾಂಕಿನ ಅಧ್ಯಕ್ಷರ ಆದೇಶದಂತೆ ಮತ್ತು ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ರವರಿಗೆ ಸಹಕಾರ ಚುನಾವಣಾ ಪ್ರಾಧಿಕಾರದ ಆಯುಕ್ತರು ಬರೆದಿರುವ ಪತ್ರದ ಮೇರೆಗೆ ಆಡಳಿತಾತ್ಮಕ ಕಾರಣಗಳಿಂದಾಗಿ ನಿಯಮಾನುಸಾರ ಬ್ಯಾಂಕಿನ ಮೂರು ವೃತ್ತ ಮೇಲ್ವಿಚಾರಕರುಗಳನ್ನು ವರ್ಗಾವಣೆಗೊಳಿಸಲಾಗಿರುತ್ತದೆ. |
| ಆ) | ಭಾರತಿ ನಗರ ವೃತ್ತದ ವ್ಯಾಪ್ತಿಗೆ ಬರುವ ಮಾದಾರಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದಲ್ಲಿ ನಡೆದ ಸುಮಾರು 10 ಆಡಳಿತ ಮಂಡಳಿ ಸಭೆಗಳಿಗೆ ಯಾರು ಯಾರು ವೃತ್ತ ಮೇಲ್ವಿಚಾರಕರು ಎಷ್ಟು ಸಭೆಗೆ ಗೈರು ಹಾಜರಾಗಿದ್ದಾರೆ; ಇವರು ಗೈರು ಹಾಜರಾಗಲು ಕಾರಣಗಳೇನು; | ಭಾರತಿ ನಗರ ವೃತ್ತದ ವ್ಯಾಪ್ತಿಗೆ ಬರುವ ಮಾದಾರಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಆಡಳಿತ ಮಂಡಳಿ ಸಭೆಯ ವಿವರ ಈ ಕೆಳಗಿನಂತಿದೆ. |

| ಕ್ರ ಸಂ | ಸಭೆ ದಿನಾಂಕ | ಮೇಲ್ವಿಚಾರಕರ ಹೆಸರು | ಗೈರು ಹಾಜರಿಗೆ ಕಾರಣ |
|---|---|---|---|
| 1 | 06-06-2020 | ಶ್ರೀ ಮಾದೇಗೌಡ | ಅನಾರೋಗ್ಯ |
| 2 | 18-06-2020 | ಶ್ರೀ ಬಸವರಾಜು | ಬ್ಯಾಂಕಿನ ಕೆಲಸದ ಒತ್ತಡ |
| 3 | 20-06-2020 | ಶ್ರೀ ಬಸವರಾಜು | ಬ್ಯಾಂಕಿನ ಕೆಲಸದ ಒತ್ತಡ |
| 4 | 10-07-2020 | ಶ್ರೀ ಎಂ.ಎಸ್ ಮಂಜು | ಬ್ಯಾಂಕಿನ ಕೆಲಸದ ಒತ್ತಡ |
| 5 | 08-06-2020 | ಶ್ರೀ ಎಂ.ಎಸ್ ಮಂಜು | ನೋಟಿಸ್ ಜಾರಿಯಾಗಿರುವುದಿಲ್ಲ |
| 6 | 09-06-2020 | ಶ್ರೀ ಎಂ.ಎಸ್ ಮಂಜು | ನೋಟಿಸ್ ಜಾರಿಯಾಗಿರುವುದಿಲ್ಲ |
| 7 | 23-06-2020 | ಶ್ರೀ ಎಂ.ಎಸ್ ಮಂಜು | ನೋಟಿಸ್ ಜಾರಿಯಾಗಿರುವುದಿಲ್ಲ |
| 8 | 02-07-2020 | ಶ್ರೀ ಎಂ.ಎಸ್ ಮಂಜು | ನೋಟಿಸ್ ಜಾರಿಯಾಗಿರುವುದಿಲ್ಲ |
| 9 | 23-07-2020 | ಶ್ರೀ ಎಂ.ಎಸ್ ಮಂಜು | ನೋಟಿಸ್ ಜಾರಿಯಾಗಿರುವುದಿಲ್ಲ |

| | | |
|---|---|---|
| ಇ) | ಈ ರೀತಿ ವೃತ್ತ ಮೇಲ್ವಿಚಾರಕರು ಗೈರು ಹಾಜರಾದ ಹಿನ್ನೆಲೆಯಲ್ಲಿ ಮಾದಾರಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದಲ್ಲಿರುವ 257 ಜನ ರೈತರಿಗೆ ಸುಮಾರು ರೂ.125.00 ಲಕ್ಷಗಳ ಸಾಲವನ್ನು ನಿಗಧಿತ ಅವಧಿಯಲ್ಲಿ ವಿತರಿಸದೆ ತೊಂದರೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ.<br>ಆದರೆ, ಮಾದಾರಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದಲ್ಲಿ 326 ಜನ ರೈತ ಸದಸ್ಯರಿಗೆ ರೂ.1,77,14,500/-ಗಳ ಅಲ್ಪಾವಧಿ ಬೆಳೆ ಸಾಲ ಬಿಡುಗಡೆಯಾಗಿರುತ್ತದೆ. ಸಾಲ ವಿತರಣೆಯು ಸಮರ್ಪಕವಾಗಿದ್ದು, ಅಗತ್ಯ ಪರಿಶೀಲನೆಯ ನಂತರ ಬಿಡುಗಡೆಗೊಳಿಸಲಾಗಿರುತ್ತದೆ. ವಿವರ ಈ ಕೆಳಕಂಡಂತಿರುತ್ತದೆ. |

| ಕ್ರ ಸಂ. | ಬ್ಯಾಂಕಿನಿಂದ ಸಾಲ ವಿತರಣೆ ಮಾಡಿದ ರೈತರ ಸಂಖ್ಯೆ | ಬ್ಯಾಂಕಿನಿಂದ ಸಾಲ ಬಿಡುಗಡೆ ದಿನಾಂಕ | ಮೊತ್ತ (ರೂ.ಗಳಲ್ಲಿ) |
|---|---|---|---|
| 1 | 73 | 01-06-2020 | 2974000 |
| 2 | 56 | 31-07-2020 | 3090000 |
| 3 | 100 | 06-08-2020 | 4439500 |
| 4 | 97 | 18-08-2020 | 7211000 |
| **ಒಟ್ಟು** | **326** | – | **1,77,14,500** |

| | | |
|---|---|---|
| ಈ) | ಗೈರು ಹಾಜರಾದ ವೃತ್ತ ಮೇಲ್ವಿಚಾರಕರ ಮೇಲೆ ಶಿಸ್ತು ಕ್ರಮ ಕೈಗೊಳ್ಳಲು ರಾಜ್ಯ ಸರ್ಕಾರ ಚುನಾವಣೆ ಆಯುಕ್ತರು ಮತ್ತು ಮಂಡ್ಯ ಜಿಲ್ಲಾಧಿಕಾರಿಗಳು ಬ್ಯಾಂಕಿನ ಸಿ.ಇ.ಓ ರವರಿಗೆ ಆದೇಶ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಇಲ್ಲ.<br>ಆಡಳಿತ ಮಂಡಳಿ ಸಭೆಯ ನೋಟೀಸು ಜಾರಿಯಾದ ಸಭೆಗಳಿಗೆ ಬ್ಯಾಂಕಿನ ವೃತ್ತ ಮೇಲ್ವಿಚಾರಕರುಗಳು ಗೈರು ಹಾಜರಾಗಿದ್ದು, ಸದರಿ ಸಭೆಗಳು ಬೈಲಾ ಅವಕಾಶಗಳನ್ವಯ ಅಗತ್ಯ ಕೋರಂ ಕೊರತೆಯಿಂದಾಗಿ ಮುಂದೂಡಲ್ಪಟ್ಟಿರುತ್ತವೆ. ಜಿಲ್ಲಾಧಿಕಾರಿಗಳು ಹಾಗೂ ಸಹಕಾರ ಚುನಾವಣಾ ಪ್ರಾಧಿಕಾರದ ಆಯುಕ್ತರು ಈ ಬಗ್ಗೆ ನಿಯಮಾನುಸಾರ ಕ್ರಮವಿಡಲು ನಿರ್ದೇಶಿಸಿದ್ದು, ಈ ಕುರಿತಂತೆ ನೋಟೀಸ್ ಜಾರಿಗೊಳಿಸಿರುತ್ತಾರೆ. |
| ಉ) | ಈ ಸಂಬಂಧ ಬ್ಯಾಂಕಿನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಏನು ಕ್ರಮ ಕೈಗೊಂಡಿದ್ದಾರೆ; ಇಲ್ಲದಿದ್ದಲ್ಲಿ ಇದಕ್ಕೆ ಕಾರಣಗಳೇನು; | ಈ ಸಂಬಂಧ ಬ್ಯಾಂಕಿನ ಮುಖ್ಯಕಾರ್ಯನಿರ್ವಹಣಾಧಿಕಾರಿಗಳು ಸಂಬಂಧಪಟ್ಟ ಮೇಲ್ವಿಚಾರಕರುಗಳಿಗೆ ಕಾರಣ ಕೇಳಿ ನೋಟೀಸ್ ನೀಡಿರುತ್ತಾರೆ. ಸದರಿಯವರುಗಳನ್ನು ಕೆ.ಎಂ.ದೊಡ್ಡಿ ವೃತ್ತದಿಂದ ವರ್ಗಾವಣೆಗೊಳಿಸಿದ್ದು, ಸದರಿಯವರ ಸಮಜಾಯಿಷಿ ಸ್ವೀಕೃತವಾದ ನಂತರ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು. |
| ಊ) | ರಾಜ್ಯ ಚುನಾವಣಾ ಆಯುಕ್ತರು ಮತ್ತು ಮಂಡ್ಯ ಜಿಲ್ಲಾಧಿಕಾರಿಗಳು ಆದೇಶವನ್ನು ಬ್ಯಾಂಕಿನ ಸಿ.ಇ.ಓ ರವರು ಪಾಲಿಸದಿದ್ದರೆ ಸರ್ಕಾರ ಇವರ ಮೇಲೆ ಯಾವ ಕ್ರಮ ಕೈಗೊಂಡು ರೈತರಿಗೆ ನ್ಯಾಯ ಒದಗಿಸುತ್ತದೆ? | ರಾಜ್ಯ ಸಹಕಾರ ಚುನಾವಣಾ ಆಯುಕ್ತರು ಮತ್ತು ಮಂಡ್ಯ ಜಿಲ್ಲಾಧಿಕಾರಿಗಳ ನಿರ್ದೇಶನದ ಮೇರೆಗೆ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ವೃತ್ತ ಮೇಲ್ವಿಚಾರಕರುಗಳನ್ನು ವರ್ಗಾವಣೆಗೊಳಿಸಿದ್ದು, ಸಂಬಂಧಪಟ್ಟವರಿಗೆ ಕಾರಣ ಕೇಳಿ ನೋಟೀಸು ಜಾರಿಗೊಳಿಸಿರುತ್ತಾರೆ. ಈ ಬಗ್ಗೆ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ನಿಯಮಾನುಸಾರ ಕ್ರಮ ಕೈಗೊಳ್ಳದೇ ಇದ್ದಲ್ಲಿ ಅವರ ವಿರುದ್ಧ ಜಿಲ್ಲಾಧಿಕಾರಿಗಳು ಹಾಗೂ ಚುನಾವಣಾ ಆಯುಕ್ತರಿಂದ ವರದಿ ಪಡೆದು ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು. |

**ಸಂಖ್ಯೆ: ಸಿಒ 351 ಸಿಎಲ್ಎಸ್ 2020**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು